

**ಕರ್ನಾಟಕ ವಿಧಾನ ಪರಿಷತ್ತು**

| | |
|---|---|
| ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ | 136 |
| ಮಾನ್ಯ ಸದಸ್ಯರ ಹೆಸರು | ಶ್ರೀ ಹೆಚ್.ಎಂ. ರಮೇಶಗೌಡ |
| ಉತ್ತರಿಸಬೇಕಾದ ದಿನಾಂಕ | 13.09.2021 |
| ಉತ್ತರಿಸುವ ಸಚಿವರು | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು |

| ಕ್ರ. ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | 2021-22ನೇ ಸಾಲಿನಲ್ಲಿ ಹೊಸದಾಗಿ 62 ನರ್ಸಿಂಗ್ ಮತ್ತು 40 ಅಲೈಡ್ ಹೆಲ್ತ್ ಸೈನ್ಸ್ ಕಾಲೇಜುಗಳಿಗೆ ನೀಡಿರುವ ಅನುಮತಿಯನ್ನು ರದ್ದುಪಡಿಸಲಾಗಿದೆಯೇ? | 2021-22ನೇ ಸಾಲಿಗೆ ಯಾವುದೇ ಕಾಲೇಜುಗಳ ಅನುಮತಿಯನ್ನು ರದ್ದುಪಡಿಸಲಾಗಿರುವುದಿಲ್ಲ. |
| ಆ) | 2021-22ನೇ ಶೈಕ್ಷಣಿಕ ಸಾಲಿನಲ್ಲಿ ಹೊಸದಾಗಿ 62 ನರ್ಸಿಂಗ್ ಮತ್ತು 40 ಅಲೈಡ್ ಹೆಲ್ತ್ ಸೈನ್ಸ್ ಕಾಲೇಜುಗಳಿಗೆ ನೀಡಿರುವ ಅನುಮತಿಯನ್ನು ಪರಿಶೀಲನೆಗಾಗಿ ರಚಿಸಿರುವ ಜಂಟಿ ಸಮಿತಿಗೆ ಎಲ್ಲಾ ದಾಖಲೆಗಳನ್ನು ನೀಡಲಾಗಿದೆಯೇ; ಇಲ್ಲವಾದಲ್ಲಿ, ನೀಡದಿರಲು ಕಾರಣವೇನು; | 2021-22ನೇ ಶೈಕ್ಷಣಿಕ ಸಾಲಿಗೆ ಸಂಬಂಧಿಸಿದಂತೆ ವಿಶೇಷ ಜಂಟಿ ಸದನ ಸಮಿತಿ ರಚನೆಯಾಗಿರುವುದಿಲ್ಲ. 2020-21ನೇ ಸಾಲಿಗೆ ಹೊಸದಾಗಿ ನರ್ಸಿಂಗ್ ಮತ್ತು ಅಲೈಡ್ ಹೆಲ್ತ್ ಸೈನ್ಸ್ ಕಾಲೇಜುಗಳಿಗೆ ನೀಡಲಾದ ಅನುಮತಿ ಸಂಬಂಧದಲ್ಲಿ ವಿಶೇಷ ಸದನ ಸಮಿತಿಯು ರಚಿಸಲ್ಪಟ್ಟಿದೆ. ಸದರಿ ಸಮಿತಿಯು ಈ ಇಲಾಖೆಯನ್ನಾಗಲಿ ಹಾಗೂ ವಿಶ್ವವಿದ್ಯಾಲಯಕ್ಕಾಗಲಿ ದಾಖಲೆಗಳನ್ನು ನೀಡುವಂತೆ ಕೋರಿರುವ ಮಾಹಿತಿ ಗಮನಕ್ಕೆ ಬಂದಿರುವುದಿಲ್ಲ. |
| ಇ) | ನರ್ಸಿಂಗ್ ಮತ್ತು ಅಲೈಡ್ ಹೆಲ್ತ್ ಸೈನ್ಸ್ ಕಾಲೇಜುಗಳಿಗೆ ನೀಡಿರುವ ಅನುಮತಿಯೇ ಪ್ರಶ್ನಾರ್ಹವಾಗಿರುವಾಗ, ಸದರಿ ಕಾಲೇಜುಗಳಿಗೆ ವಿದ್ಯಾರ್ಥಿಗಳ ಪ್ರವೇಶಾವಕಾಶಕ್ಕೆ ಅನುಮತಿ ನೀಡಲಾಗಿದೆಯೇ: ಎಷ್ಟು ಕಾಲೇಜುಗಳು 2021-2022ರ ಶೈಕ್ಷಣಿಕ ವರ್ಷಕ್ಕೆ ವಿದ್ಯಾರ್ಥಿಗಳ ಪ್ರವೇಶಕ್ಕಾಗಿ ಅರ್ಜಿಗಳನ್ನು ನೀಡುತ್ತಿವೆ; | 2021-22ನೇ ಸಾಲಿಗೆ ಸರ್ಕಾರಿ ಸಂಸ್ಥೆಯಾದ ಶ್ರೀ ಅಟಲ್ ಬಿಹಾರಿ ವಾಜಪೇಯಿ ಇನ್ಸಿಟಿಟ್ಯೂಟ್ ಆಫ್ ಅಲೈಡ್ ಹೆಲ್ತ್ ಸೈನ್ಸ್‌ಸ್ ಕಾಲೇಜ್, ಬೆಂಗಳೂರು ಈ ಸಂಸ್ಥೆಗೆ ವಿಶ್ವವಿದ್ಯಾಲಯದಿಂದ ಅಧಿಸೂಚನೆ ನೀಡಲಾಗಿರುತ್ತದೆ. |
| ಈ) | 2021-2022ನೇ ಸಾಲಿನಲ್ಲಿ ವಿದ್ಯಾರ್ಥಿಗಳ ಪ್ರವೇಶಾತಿಯ ಬಳಿಕ ಜಂಟಿ ಸದನ ಸಮಿತಿಯು ಕಾಲೇಜುಗಳ ಅನುಮತಿಯನ್ನು ರದ್ದುಪಡಿಸಲು ಶಿಫಾರಸ್ಸು ಮಾಡಿದರೆ, ಆ ಕಾಲೇಜಿನಲ್ಲಿ ಪ್ರವೇಶಾತಿ ಪಡೆದ ವಿದ್ಯಾರ್ಥಿಗಳ ಭವಿಷ್ಯವೇನು; ಇದರಿಂದ ಸರ್ಕಾರವೇ ಅನಗತ್ಯ ಗೊಂದಲು ಸೃಷ್ಟಿಸಿದಂತಾಗಲಿಲ್ಲವೇ; ಈ ಕುರಿತು ಸರ್ಕಾರದ ನಿಲುವೇನು? | ವಿಶೇಷ ಜಂಟಿ ಸದನ ಸಮಿತಿಯು ವರದಿಯನ್ನು ಸಲ್ಲಿಸಿರುವ ಮಾಹಿತಿ ಇರುವುದಿಲ್ಲ. ಆದುದರಿಂದ, ಈ ಬಗ್ಗೆ ಸರ್ಕಾರವು ಸೂಕ್ತ ನಿಲುವನ್ನು ತಳೆಯಲು ಸಾಧ್ಯವಾಗಿರುವುದಿಲ್ಲ. |

ಸಂಖ್ಯೆ: ಎಂಇಡಿ 111 ಆರ್‌ಜಿಯು 2021

(ಡಾ|| ಕೆ. ಸುಧಾಕರ್)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ
ವೈದ್ಯಕೀಯ ಶಿಕ್ಷಣ ಸಚಿವರು